ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2070
ಸದಸ್ಯರ ಹೆಸರು : ಶ್ರೀ ಎಸ್. ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 27.03.2020.
ಉತ್ತರಿಸುವ ಸಚಿವರು : ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದ ವಿವಿಧ ಭಾಗಗಳಲ್ಲಿ ಕಲಾತಂಡಗಳನ್ನು ಮತ್ತು ಕಲಾವಿದರನ್ನು ಗುರುತಿಸಿ ಅವರುಗಳನ್ನು ಪ್ರೋತ್ಸಾಹಿಸುವಂತಹ ಕಾರ್ಯಗಳು ಸರ್ಕಾರದ ಮಟ್ಟದಲ್ಲಿ ನಡೆಯುತ್ತಿದೆಯೇ; | ಹೌದು. |
| ಆ. | ಹಾಗಿದ್ದಲ್ಲಿ, ಇನ್ನೂ ಬೆಳಕಿಗೆ ಬಾರದ ಹಲವಾರು ಪ್ರತಿಭಾ ಕಲಾತಂಡಗಳು ಅವಕಾಶ ವಂಚಿತರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿರುವುದಿಲ್ಲ. |
| ಇ. | ಈ ಕಲಾವಿದರುಗಳನ್ನು ಪ್ರೋತ್ಸಾಹಿಸಿ ಅವರುಗಳನ್ನು ಮುಖ್ಯ ವೇದಿಕೆಗೆ ಕರೆತರುವ ಜವಾಬ್ದಾರಿಯನ್ನು ಇಲಾಖಾ ಅಧಿಕಾರಿಗಳು ಮಾಡುವಲ್ಲಿ ಸಫಲರಾಗಿದ್ದಾರೆಯೇ; ಹಾಗಿದ್ದಲ್ಲಿ, ರಾಜ್ಯದ ವಿವಿಧ ಭಾಗಗಳಲ್ಲಿನ ಕಲಾವಿದರುಗಳು ಅವಕಾಶ ವಂಚಿತರಾಗಿರುವುದಕ್ಕೆ ಕಾರಣಗಳೇನು; | ಕಲಾವಿದರುಗಳನ್ನು ಪ್ರೋತ್ಸಾಹಿಸಿ ಅವರುಗಳನ್ನು ಮುಖ್ಯ ವೇದಿಕೆಗೆ ಕರೆತರುವ ಜವಾಬ್ದಾರಿಯನ್ನು ಇಲಾಖಾ ಅಧಿಕಾರಿಗಳು ಮಾಡುವಲ್ಲಿ ಸಫಲರಾಗಿರುತ್ತಾರೆ.<br><br>ರಾಜ್ಯದ ವಿವಿಧ ಭಾಗಗಳಲ್ಲಿನ ಕಲಾವಿದರುಗಳು ಅವಕಾಶ ವಂಚಿತರಾಗುವ ಪ್ರಶ್ನೆ ಉದ್ಭವಿಸುವುದಿಲ್ಲ. |
| ಈ. | ಇವರುಗಳನ್ನು ಬೆಳೆಸುವಂತಹ ಹಾಗೂ ಪ್ರೋತ್ಸಾಹಿಸುವ ಸಲುವಾಗಿ ಅವರಿಗೆ ಭವಿಷ್ಯಕ್ಕೆ ಅನುಗುಣವಾಗಿ ಭದ್ರತೆಯನ್ನು ನೀಡಲಾಗಿದೆಯೇ; ಹಾಗಿದ್ದಲ್ಲಿ, ಯಾವ ರೀತಿಯ ಭದ್ರತೆಯನ್ನು ನೀಡಲಾಗಿದೆ; ಸರ್ಕಾರವು ಈ ವಿಷಯವಾಗಿ ಕೈಗೊಂಡ ಕ್ರಮಗಳೇನು; | ಹೌದು.<br><br>60 ವರ್ಷ ಮೇಲ್ಪಟ್ಟ ಕಷ್ಟ ಪರಿಸ್ಥಿತಿಯಲ್ಲಿರುವ ಸಾಹಿತಿ / ಕಲಾವಿದರುಗಳಿಗೆ ಪ್ರತಿ ತಿಂಗಳು ರೂ.2000/-ಗಳ ಮಾಸಾಶನವನ್ನು ನೀಡಲಾಗುತ್ತಿದೆ. ಅಲ್ಲದೇ, ಮೃತಪಟ್ಟ ಕಲಾವಿದರ ಪತ್ನಿಯರಿಗೆ ವಿಧವಾ ಮಾಸಾಶನವನ್ನು ನೀಡಲಾಗುತ್ತಿದೆ. |
| ಉ. | ಇಲಾಖೆಯ ವತಿಯಿಂದ ನಡೆದ ಕಾರ್ಯಕ್ರಮಗಳು ಆಯಾ ಜಿಲ್ಲೆಗಳಲ್ಲಿ ಸೂಕ್ತವಾದ ಸಮಯದಲ್ಲಿ ಜರುಗಲಿದೆಯೇ; ಹಾಗಿದ್ದಲ್ಲಿ, ಇನ್ನೂ ಅನೇಕ ಭಾಗಗಳಲ್ಲಿ ಇಲಾಖಾ ವತಿಯಿಂದ ಕೈಗೊಳ್ಳುವ ಕಾರ್ಯಕ್ರಮಗಳು, ಯೋಜನೆಗಳು ಜನಸಾಮಾನ್ಯರನ್ನು ತಲುಪಿದೆಯೇ; ತಲುಪಿಸುವಲ್ಲಿ ಸರ್ಕಾರವು ಕೈಗೊಂಡ ಕ್ರಮಗಳೇನು; | • ಹೌದು.<br>• ಕ್ರಿಯಾ ಯೋಜನೆಯಂತೆ ಅನುದಾನದ ಮಿತಿಯಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br>• ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ ಏರ್ಪಡಿಸಲಾಗುವ ಎಲ್ಲಾ ನಿರಂತರ ಕಾರ್ಯಕ್ರಮಗಳಿಗೆ ಆಮಂತ್ರಣ ಪತ್ರಿಕೆಗಳನ್ನು ಸಾಕಷ್ಟು ಪೂರ್ವದಲ್ಲಿಯೇ ಮುದ್ರಿಸಿ ವಾರ್ತಾ ಇಲಖೆಯ ಮುಖಾಂತರ ಪತ್ರಿಕೆಗಳಲ್ಲಿ ಪ್ರಚಾರ ನೀಡಲಾಗುತ್ತಿದೆ. ರಾಜ್ಯಮಟ್ಟದಲ್ಲಿ ಏರ್ಪಡಿಸುವ ಕಾರ್ಯಕ್ರಮಗಳಿಗೆ ಪತ್ರಿಕೆಗಳಲ್ಲಿ ಜಾಹೀರಾತು ನೀಡುವ ಮುಖಾಂತರ ಮತ್ತು ಸಂಘ-ಸಂಸ್ಥೆಗಳಿಗೆ ಹಗೂ ಜನಪ್ರತಿನಿಧಿಗಳಿಗೆ ಆಮಂತ್ರಣ ಪತ್ರಿಕೆಗಳನ್ನು ನೀಡುವ ಮುಖಾಂತರ ಪ್ರಚಾರ ಮಾಡಿ ಯೋಜನೆಗಳನ್ನು ಸದ್ಬಳಕೆಯಾಗುವಂತೆ ಮಾಡಲಾಗುತ್ತಿದೆ. |

ಸಂಖ್ಯೆ: ಕಸಂವಾ 58 ಕವಿಸ 2020.

(ಸಿ.ಟಿ. ರವಿ)
ಪ್ರವಾಸೋದ್ಯಮ, ಕನ್ನಡ ಮತ್ತು ಸಂಸ್ಕೃತಿ ಹಾಗೂ
ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು.